WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೭ | ಬೆಂಗಳೂರು, ಗುರುವಾರ, ಆಗಸ್ಟ್ ೧೬, ೨೦೧೨ (ಶ್ರಾವಣ ೨೫, ಶಕ ವರ್ಷ ೧೯೩೪) | ಸಂಚಿಕೆ ೩೩ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಇಬಂಜಸಾಇ ಇಲಾಖೆ, ತುಮಕೂರು ವಿಭಾಗ, ತುಮಕೂರು**

**" ಅಧಿಕೃತ ಜ್ಞಾಪನಾ ಪತ್ರ "**

**ಸಂ:ಕಾಪಾಇಂ::ಲೋಇ:ತುಮಃಸಿ–2: ಅ.ಗೈಹಾ:ಗ್ಯಾಂಗ್:ಚಿನಾಹಃಇವಿ:ಸೇ:ವಜಾ: 12–13/791, ದಿನಾಂಕಃ 8ನೇ ಜೂನ್ 2012**

**ವಿಷಯ ಃ–** ಶ್ರೀರಾಮಯ್ಯ ಬಿನ್ ಆದಪ್ಪ , ಗ್ಯಾಂಗ್‌ಮನ್ , ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ , ಲೋಬಂಒಜಸಾ ಉಪವಿಭಾಗ, ಚಿ.ನಾ.ಹಳ್ಳಿರವರ ವಿರುದ್ಧ ಅನಧಿಕೃತ ಗೈರುಹಾಜರಿ ಮತ್ತು ನಾಪತ್ತೆ ಕಾರಣ ಶಿಸ್ತು ಕ್ರಮವಾಗಿ ಸೇವೆಯಿಂದ ವಜಾಗೊಳಿಸುವ ಬಗ್ಗೆ .

**ಉಲ್ಲೇಖಃ–**
1. ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಬಂಒಜಸಾ ಉಪವಿಭಾಗ, ಚಿ.ನಾ.ಹಳ್ಳಿ ರವರ ತಿಳುವಳಿಕೆ ಪತ್ರ ಸಂಖ್ಯೆ: 204: ದಿನಾಂಕಃ 4–9–2010.
2. ಈ ಕಛೇರಿ ಪ.ಸಂ: 2126: ದಿ. 29–9–2010.
3. ಸ.ಕಾ.ಇಂ.ರವರ ಪ.ಸಂ: 232: ದಿ. 1–10–2010.
4. ಈ ಕಛೇರಿ ಅಮಾನತ್ತು ಆದೇಶ ಸಂ: 3048: ದಿ. 7–12–2010.
5. ಸ.ಕಾ.ಇಂ.ರವರ ಪ.ಸಂ: 315: ದಿ. 13–12–2010.
6. ಸ.ಕಾ.ಇಂ.ರವರ ಪ. ಸಂ: 340: ದಿ. 27–12–2010.
7. ಸ.ಕಾ.ಇಂ.ರವರ ಪ. ಸಂ: 434: ದಿ. 8–3–2011.
8. ಸ.ಕಾ.ಇಂ.ರವರ ಪ. ಸಂ: 45: ದಿ. 13–5–2011.
9. ಸ.ಕಾ.ಇಂ.ರವರ ಪ. ಸಂ: 134: ದಿ. 14–7–2011.
10. ಈ ಕಛೇರಿ ಅಂತಿಮ ತಿಳುವಳಿಕೆ ಪ.ಸಂ: 1296: ದಿ. 6–8–11
11. ಈ ಕಛೇರಿ ಪ.ಸಂ: 1689: ದಿ. 2–9–11 ಪತ್ರಿಕಾ ಪ್ರಕಟಣೆಗಾಗಿ ಮಾನ್ಯ ಸಹಾಯಕ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ , ವಾರ್ತಾ ಭವನ, ತುಮಕೂರು ರವರಿಗೆ.
12. ಈ ಕಛೇರಿ ಪ.ಸಂ: 1987: ದಿ. 24–9–11
13. ಈ ಕಛೇರಿ ಪ.ಸಂ: 2097: ದಿ. 1–10–11
14. ಈ ಕಛೇರಿ ತುಮಕೂರು ವಾರ್ತೆ ಸ್ಥಳೀಯ ದಿನಪತ್ರಿಕೆ ಜಾಹೀರಾತಿನ ಪ್ರಕಟಣಾ ದಿನಾಂಕಃ 13–10–2011.

15. ಸ.ಕಾ.ಇಂ.ರವರ ಪ.ಸಂ: 314: ದಿ. 29–11–11.
16. ಈ ಕಛೇರಿ ಪ.ಸಂ: 3038: ದಿ. 21–12–11.
17. ಉದಯವಾಣಿ ರಾಜ್ಯಮಟ್ಟದ ದೈನಿಕ ಪ್ರಕಟಣಾ ದಿನಾಂಕಃ 15–10–11.
18. ಈ ಕಛೇರಿ ಆದೇಶ ಸಂ: 3585: ದಿ. 3–2–12.
19. ಈ ಕಛೇರಿ ತಿಳುವಳಿಕೆ ಪ.ಸಂ: 3643: ದಿ. 9–2–2012.
20. ಈ ಕಛೇರಿ ಇಲಾಖಾ ವಿಚಾರಣೆ ನೋಟೀಸ್ ಸಂ. 3702: ದಿ. 14–2–12.
21. ಈ ಕಛೇರಿ ಪ.ಸಂ: 3706: ದಿ. 14–2–2012.
22. ತಮ್ಮ ಕಛೇರಿ ಪ.ಸಂ: 8573: ದಿ. 23–2–12.
23. ಈ ಕಛೇರಿ ವಿಚಾರಣಾ ನೋಟೀಸ್ ಸಂ: 4015: ದಿ. 6–3–12.
24. ಈ ಕಛೇರಿ ವಿಚಾರಣಾ ನೋಟೀಸ್ ಸಂ: 64: ದಿ. 12–4–12.
25. ಈ ಕಛೇರಿ ವಿಚಾರಣಾ ನೋಟೀಸ್ ಸಂ: 285: ದಿ. 28–4–12.
26. ಶ್ರೀ ಎಂ.ಎಸ್.ಲಿಂಗರಾಜು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಪದನಿಮಿತ್ತ ವಿಚಾರಣಾ ಪ್ರಾಧಿಕಾರಿಗಳ ವಿಚಾರಣಾ ವರದಿ ಪತ್ರ ಸಂ: 116: ದಿನಾಂಕಃ 10–05–12.
27. ಅಧೀಕ್ಷಕ ಇಂಜಿನಿಯರ್ , ಲೋಬಂಒಜಸಾ ಇಲಾಖೆ , ಬೆಂಗಳೂರು ವೃತ್ತ , ಬೆಂಗಳೂರುರವರ ಪ.ಸಂ.ಎಸ್ಇಬಿಸಿ:ಸಿ–3: ಗ್ಯಾಂಗ್‌ಮನ್:ಅಗೈಹಾ: 2012–13: 1107: ದಿ. 7–6–2012.

**ಪ್ರಸ್ತಾವನೆ:–**

1. ಶ್ರೀ ರಾಮಯ್ಯ ಬಿನ್ ಆದಪ್ಪ , ಗ್ಯಾಂಗ್‌ಮನ್ , ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಬಂಒಜಸಾ ಉಪವಿಭಾಗ, ಚಿ.ನಾ.ಹಳ್ಳಿ ರವರು ದಿನಾಂಕಃ 10–08–2010 ರಿಂದ ಈವರೆವಿಗೆ ಕಛೇರಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಉಪವಿಭಾಗ, ಹಾಗೂ ವಿಭಾಗ ಕಛೇರಿಗಳಿಂದ ನೋಂದಣಿ ಅಂಚೆ ಮೂಲಕ ನೀಡಲಾಗಿರುವ ಮೆಮೋಗಳು, ಹಾಜರಾತಿ ತಿಳುವಳಿಕೆ ಪತ್ರಗಳು, ಸೂಚನಾ ಪತ್ರಗಳು, ಅಂತಿಮ ತಿಳುವಳಿಕೆ ಪತ್ರಗಳು ಹಾಗೂ ಪತ್ರಿಕಾ ಪ್ರಕಟಣಾ ಜಾಹೀರಾತು ಪತ್ರಗಳು ಸೇವಾ ಪುಸ್ತಕದ ನಮೂದಿತ ವಿಳಾಸದಲ್ಲಿ ಸ್ವೀಕೃತವಾಗದೇ ಹಿಂಪಡೆಯಲಾಗಿರುತ್ತದೆ. ಕಛೇರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವ ಸರ್ಕಾರಿ ನೌಕರರು ಸೇವೆಯಲ್ಲಿರುವಾಗ ಎಸಗುವ ಅಪರಾಧಗಳ ಕುರಿತು ವಿಚಾರಣೆ ನಡೆಸಿ, ಸಾಬೀತಾದ ಪ್ರಕರಣಗಳಲ್ಲಿ ಆರೋಪಿತ ನೌಕರರಿಗೆ ವಿಧಿಸಬಹುದಾದ ದಂಡನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ–8 ಹಾಗೂ ನಿಯಮ–10ರನ್ವಯ ದಂಡನೆಯನ್ನು ವಿಧಿಸಬಹುದಾಗಿದ್ದು, ಅದರಂತೆ ಉಲ್ಲೇಖ(4)ರ ಪತ್ರದಲ್ಲಿ ತತ್‌ಕ್ಷಣದಿಂದ ಜಾರಿಗೆ ಬರುವಂತೆ ವಿಚಾರಣೆಯನ್ನು ಕಾಯ್ದಿರಿಸಿ, ಶ್ರೀಯುತರನ್ನು ಅಮಾನತ್ತಿನಲ್ಲಿಡಲಾಗಿದೆ.

2. ಉಲ್ಲೇಖಿತ–(10)ರ ಪತ್ರದಲ್ಲಿ ಈ ವಿಭಾಗದಿಂದ ಮೇಲ್ಕಂಡ ನೌಕರರಿಗೆ ಅಂತಿಮ ತಿಳುವಳಿಕೆ ನೋಟೀಸ್‌ನ್ನು ಜಾರಿಮಾಡಿ ಸೂಚನಾರಹಿತವಾಗಿ ಗೈರುಹಾಜರಾಗುವುದನ್ನು ಅನಧಿಕೃತ ಗೈರುಹಾಜರಿ ಎಂದು ಪರಿಗಣಿಸಿ, ನಿಯಮಾವಳಿಗಳ ರೀತ್ಯಾ ನಿಮ್ಮನ್ನು ಸೇವೆಯಿಂದ ಏಕೆ ತೆಗೆಯಬಾರದು? ಅಥವಾ ವಜಾ ಮಾಡಬಾರದು? ಎಂಬುದಕ್ಕೆ ಸಮಜಾಯಷಿಕೆ ಹೇಳಿಕೆ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಿ ಪತ್ರಿಕಾ ಪ್ರಕಟಣೆ ಹಾಗೂ ಕರ್ನಾಟಕ ರಾಜ್ಯಪತ್ರದ ಮೂಲಕ ಪ್ರಚುರಪಡಿಸಲಾಗಿತ್ತು.

3. ಮೇಲಿನ ಯಾವುದೇ ವಿಧಾನದಿಂದಲೂ ಶ್ರೀಯುತರ ಹಾಜರಾತಿಯಲ್ಲಿ ಯಾವುದೇ ಬದಲಾವಣೆ ಕಾಣದ ಕಾರಣ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ , ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957, ನಿಯಮ–11ರ ರೀತ್ಯಾ ಶಿಸ್ತು ವ್ಯವಹರಣೆ ಜರುಗಿಸಲು ನಿರ್ಧರಿಸಿ, ವಿಚಾರಣಾಧಿಕಾರಿಗಳು ಹಾಗೂ ಅಭಿಯೋಕ್ತ ಅಧಿಕಾರಿಗಳನ್ನು ಉಲ್ಲೇಖಿತ(18)ರ ಪತ್ರದಲ್ಲಿ ನೇಮಕಮಾಡಿ, ವಿಚಾರಣೆ ನಡೆಸಿ, 3 ತಿಂಗಳ ಒಳಗಾಗಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿತ್ತು.

4. ಉಲ್ಲೇಖಿತ–(26)ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿ (ಪ್ರತಿ ಲಗತ್ತಿಸಿದೆ), ವಿಚಾರಣೆಗೆ ಹಾಜರಾಗುವಂತೆ ಮೂರು ನೋಟೀಸ್‌ಗಳನ್ನು ಜಾರಿ ಮಾಡಿದ್ದರೂ ಸಹ, ಮೇಲ್ಕಂಡ ನೌಕರರು ವಿಚಾರಣೆಗೆ ಹಾಜರಾಗಿಲ್ಲ ಹಾಗೂ ರವಾನಿಸಲ್ಪಟ್ಟ ನೋಟೀಸ್‌ಗಳು ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು–1966ರ ನಿಯಮ–3 ಉಪನಿಯಮ–(1)(11)(111)ನೇ ಖಂಡಗಳನ್ನು ಮೇಲ್ಕಂಡ ನೌಕರರು ಉಲ್ಲಂಘಿಸಿರುವುದರಿಂದ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು, ನಿಯಮ–108ರಂತೆ ಸೇವೆಯಿಂದ ವಜಾ ಮಾಡಬಹುದು ಎಂಬುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

**"ಆದೇಶ"**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ಉಲ್ಲೇಖ(27)ರ ಅಧೀಕ್ಷಕ ಇಂಜಿನಿಯರ್ , ಲೋಬಂಒಜಸಾ ಇಲಾಖೆ , ಬೆಂಗಳೂರು ವೃತ್ತ, ಬೆಂಗಳೂರು ರವರ ನಿರ್ದೇಶನದನ್ವಯ ಶ್ರೀ ರಾಮಯ್ಯ ಬಿನ್ ಆದಪ್ಪ , ಗ್ಯಾಂಗ್‌ಮನ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಬಂಒಜಸಾ ಉಪವಿಭಾಗ, ಚಿ.ನಾ.ಹಳ್ಳಿ ರವರು ದಿನಾಂಕಃ 10–08–2010 ರಿಂದ ಈವರೆವಿಗೆ ಕಛೇರಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದು ಸಾಬೀತಾಗಿರುವುದರಿಂದ ಕೆ ಸಿ ಎಸ್ ಆರ್ ನಿಯಮಾವಳಿಗಳು, ನಿಯಮ–108ರ ಪ್ರಕಾರ ಶ್ರೀಯುತರನ್ನು ದುರ್ನಡತೆ

ಅಪರಾಧಕ್ಕಾಗಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957, ನಿಯಮ–9(2)(ಸಿ) ಮತ್ತು ನಿಯಮ–8(8)ರಲ್ಲಿ ದತ್ತವಾದ ಅಧಿಕಾರದನ್ವಯ ಪಿ.ಹಾಲಚಿಕ್ಕಣ್ಣ– ಕಾರ್ಯಪಾಲಕ ಇಂಜಿನಿಯರ್ , ಲೋಬಂ ಮತ್ತು ಒಜಸಾ ಇಲಾಖೆ , ತುಮಕೂರು ವಿಭಾಗ, ತುಮಕೂರು ಆದ ನಾನು ಶ್ರೀ ರಾಮಯ್ಯ ಬಿನ್ ಆದಪ್ಪ, ಗ್ಯಾಂಗ್‌ಮನ್‌ರವರನ್ನು ತರ್ತ್‌ಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದ ದಂಡನೆಯನ್ನು ವಿಧಿಸಿರುತ್ತೇನೆ. ಈ ಬಗ್ಗೆ ಮನವಿಗೆ ಹಾಗೂ ಇನ್ನಿತರೆ ಅಪೀಲುಗಳಿಗೆ ಅವಕಾಶ ಇರುವುದಿಲ್ಲ.

**ಕಾರ್ಯಪಾಲಕ ಇಂಜನಿಯರ್ ಹಾಗೂ**
**ಪದನಿಮಿತ್ತ ಶಿಸ್ತು ಪ್ರಾಧಿಕಾರಿ,**
**ಲೋಬಂಒಜಸಾಇ ವಿಭಾಗ, ತುಮಕೂರು.**

**ಪಿ.ಆರ್. 851**

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಇಡಿ 117 ಡಿಪಿಐ 2011, ಬೆಂಗಳೂರು, ದಿನಾಂಕ:12/06/2012.**

**ವಿಷಯ:–** ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ವೃಂದದ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01/01/2012 ರಲ್ಲಿದ್ದಂತೆ ಪ್ರಕಟಿಸುವ ಕುರಿತು.

ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ವೃಂದದ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01/01/2012 ರಲ್ಲಿರುವಂತೆ ತಯಾರಿಸಿ, ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ, ಇದರಿಂದ ಬಾಧಿತರಾಗಬಹುದಾದಂತಹ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ/ಸಲಹೆ/ಸೂಚನೆಗಳಿದ್ದಲ್ಲಿ, ಅದನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಸಲ್ಲಿಸಿ, ಅದರ ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ), ಕರ್ನಾಟಕ ಸರ್ಕಾರದ ಸಚಿವಾಲಯ, 6ನೇ ಮಹಡಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಈ ನಿಗಧಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು/ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶ್ರೀಪಾದು ಹೆಚ್.ಎನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಆಡಳಿತ).

### ಅನುಬಂಧ

**ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ವೃಂದದ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01/01/2012 ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಪ.ಜಾತಿ / ಪ.ಪಂಗಡ ಸಾಮಾನ್ಯ | ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | 50 | ಎಸ್.ರಂಗನಾಥ | 01/06/1951 | ಸಾಮಾನ್ಯ | 13/01/2011 |
| 2. | 53 | ಎಂ.ಎ.ಬಾಗೇವಾಡಿ | 01/06/1952 | ಸಾಮಾನ್ಯ | 13/01/2011 |
| 3. | 59 | ಎಂ.ಬಿ.ಕೆಂಚಣ್ಣನವರ್ | 28/02/1951 | ಸಾಮಾನ್ಯ | 13/01/2011 |
| 4. | 60 | ಅಪ್ಪಾ ಸಾಹೇಬ ಪಾಟೀಲ | 01/06/1951 | ಸಾಮಾನ್ಯ | 13/01/2011 |
| 5. | 61 | ಮೋಹನ ಕಲಹಾಳ್ | 02/04/1954 | ಸಾಮಾನ್ಯ | 13/01/2011 |
| 6. | 63 | ಆರ್.ವಿ.ನಾಗರಾಜು | 14/02/1952 | ಸಾಮಾನ್ಯ | 13/01/2011 |
| 7. | 65 | ಎಂ.ಎ.ರೇವಣ್ಣ | 06/08/1952 | ಸಾಮಾನ್ಯ | 13/01/2011 |
| 8. | 154 | ಬಿ.ಹೆಚ್.ರಾಮವಾಡಗಿ | 01/05/1953 | ಪ.ವರ್ಗ | 13/01/2011 |
| 9. | 208 | ರಾಮದಾಸಪ್ಪ | 02/09/1954 | ಪ.ಜಾತಿ | 13/01/2011 |

| | | | | | |
|---|---|---|---|---|---|
| 10. | 294 | ಎಂ.ಎನ್.ನರಸಪ್ಪ | 01/07/1958 | ಪ.ಜಾತಿ | 13/01/2011 |
| 11. | 328 | ಅನಂತ ನಾಯಕ | 22/05/1961 | ಪ.ಜಾತಿ | 13/01/2011 |
| 12. | 340 | ಟಿ.ಹೆಚ್.ಮೇಲಿನಕೇರಿ | 22/07/1959 | ಪ.ಜಾತಿ | 13/01/2011 |

**ಶ್ರೀಪಾದು ಹೆಚ್.ಎನ್.,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಆಡಳಿತ)

**ಪಿ.ಆರ್. 852**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, 2ನೇ ಮಹಡಿ ಮಿನಿ ವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು. ಇವರ ಕಾರ್ಯಾಲಯದ ನಡವಳಿಕೆಗಳು.

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ.,ಅಲ್ಕೆರೆ ಕುಣಿಗಲ್ ತಾಲ್ಲೂಕು ಇದನ್ನು ಋಣಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ಇವರ ಪತ್ರ ಸಮ.ಸನಿ.32/ಸಮಾಪನೆ/01/2011-12 ದಿನಾಂಕ:28-3-2012

2) ಪತ್ರಿಕಾ ಪ್ರಕಟಣೆ ದಿನಾಂಕ:8-11-2011.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಲ್ಕೆರೆ ಕುಣಿಗಲ್ ತಾಲ್ಲೂಕು ಈ ಸಂಘವು ಸಂಖ್ಯೆ ಎಆರ್‌ಟಿ:29303/ 2001-02 ದಿನಾಂಕ:31-12-2001ರಂತೆ ಸಹಾಯಕ ನಿಬಂಧಕರ ಕಛೇರಿ ತುಮಕೂರಿನಲ್ಲಿ ನೊಂದಣಿಯಾಗಿದ್ದು ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯುಳ್ಳದ್ದಾಗಿರುತ್ತದೆ.

1. ಸಂಘವು ವಾರ್ಷಿಕ ಮಹಾಸಭೆಯನ್ನು ನಡೆಸದೇ ಇರುವುದರಿಂದ ಕಾಯ್ದೆ ಹಾಗೂ ನಿಯಮಗಳನ್ನು ಉಲ್ಲಂಘಿಸಿದಂತಾಗಿರುತ್ತದೆ.
2. ಸಂಘದ ಆಡಳಿತ ಅವಧಿಯು ಮುಕ್ತಾಯವಾಗಿದ್ದು ಆಡಳಿತ ಮಂಡಳಿ ಪುನ: ರಚನೆಗೆ ಕ್ರಮ ಕೈಗೊಂಡಿರುವುದಿಲ್ಲ.
3. ಸಂಘವು ಕಾರ್ಯಕಾರಿ ಮಂಡಳಿ ಸಭೆಗಳನ್ನು ನಡೆಸದೇ ಬೈಲಾ ಉದ್ದೇಶಗಳನ್ನು ಪೂರೈಸದೇ ಉಪನಿಯಮ ಉಲ್ಲಂಘನೆ ಮಾಡಿರುತ್ತಾರೆ.
4. ಸಂಘವು ದಿನಾಂಕ:2-1-2004 ರಿಂದ ಸ್ಥಗಿತವಾಗಿದ್ದು 2000-01ರಿಂದ ಸಂಘದ ಲೆಕ್ಕಪುಸ್ತಕಗಳು ಲೆಕ್ಕಪರಿಶೋಧನೆ ಯಾಗಬೇಕಾಗಿರುವುದರಿಂದ ಇದರ ಬಗ್ಗೆ ಯಾರು ಗಮನಹರಿಸಿರುವುದಿಲ್ಲ.

ಒಟ್ಟಾರೆ ಸಂಘವು ಉಪನಿಯಮ ರೀತ್ಯಾ ಕಾರ್ಯನಿರ್ವಹಿಸದೇ ಸಂಪೂರ್ಣವಾಗಿ ಸ್ಥಗಿತಗೊಂಡ ಸಂಘವಾಗಿ ಮುಂದುವರಿದಿದ್ದು ಸಂಘದ ಪುನ:ಶ್ಚೇತನಕ್ಕೆ ಸಾರ್ವಜನಿಕರಿಂದಾಗಲೀ ಆಡಳಿತ ಮಂಡಳಿ ಸದಸ್ಯರಿಂದಾಗಲೀ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವಾದ ಪ್ರಯುಕ್ತ ಈ ಕೆಳಕಂಡ ಆದೇಶ ನೀಡಿದೆ.

## ಆದೇಶ

**ಸಂ.ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್90:2012-13, ದಿನಾಂಕ:19-4-2012.**

ಶ್ರೀ.ಆರ್.ಲೋಕೇಶ್, ಸಹಕಾರ ಸಂಘಗಳ ಉಪ ನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/139/ಸಿಎಲ್‌ಎಂ/2010-11, ದಿನಾಂಕ:17-2-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಹಾಲು ಉತ್ಪಾದಕರ ಸಹಕಾರ ಸಂಘ ನಿ.,ಅಲ್ಕೆರೆ ಕುಣಿಗಲ್ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಕುಣಿಗಲ್ ತಾಲ್ಲೂಕು, ಕುಣಿಗಲ್ ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ ಜವಾಬ್ದಾರಿ ತ:ಖ್ತೆ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾಪಟ್ಟಿಯ 3 ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಿ ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:19-4-2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ತುಮಕೂರು ಜಿಲ್ಲೆ, ತುಮಕೂರು.**

**ಪಿ.ಆರ್. 785**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, 2ನೇ ಮಹಡಿ ಮಿನಿ ವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು. ಇವರ ಕಾರ್ಯಾಲಯದ ನಡವಳಿಕೆಗಳು.**

**ವಿಷಯ :** ಸ್ಥಗಿತಗೊಂಡಿರುವ ತಿಪಟೂರು ಟೌನ್ ಹರಿಜನ/ಗಿರಿಜನ ಮಹಿಳಾ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಗಾಂಧಿನಗರ ತಿಪಟೂರು ಇದನ್ನು ಋಣಸಮಾಪನೆಗೊಳಿಸುವ ಬಗ್ಗೆ

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ ತಿಪಟೂರು ಇವರ ಪತ್ರ ಸಂ.ಸನಿ34/ಎಲ್‌ಕ್ಯೂಡಿ/2/2012-13 ದಿನಾಂಕ:4-6-2012.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ತಿಪಟೂರು ಟೌನ್ ಹರಿಜನ/ಗಿರಿಜನ ಮಹಿಳಾ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಗಾಂಧಿನಗರ ತಿಪಟೂರು ಇದರ ನೊಂದಣಿ ಸಂಖ್ಯೆ ಎಆರ್‌ಟಿ/15/1971-72 ದಿನಾಂಕ:22-3-1972ರಲ್ಲಿ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರಿಂದ ನೊಂದಾಯಿಸಲ್ಪಟ್ಟಿದ್ದು ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯುಳ್ಳದ್ದಾಗಿರುತ್ತದೆ.

ಸಂಘವು ತನ್ನ ಬೈಲಾಕ್ಕೆ ಅನುಗುಣವಾಗಿ ಕಾರ್ಯನಿರ್ವಹಿಸದೇ ಈ ಕೆಳಕಂಡಂತೆ ಕಾನೂನು ಉಲ್ಲಂಘನೆ ಮಾಡಿರುತ್ತದೆ.

1. ಸಂಘವು ವಾರ್ಷಿಕ ಮಹಾಸಭೆಯನ್ನು ನಡೆಸದೇ ಇದ್ದು ಸಹಕಾರಿ ಕಾಯ್ದೆ ಹಾಗೂ ನಿಯಮಗಳನ್ನು ಉಲ್ಲಂಘನೆ ಮಾಡಲಾಗಿದೆ.
2. ಸಂಘವು ಲೆಕ್ಕ ಪತ್ರಗಳು 31-3-1999ರವರೆಗೆ ಆಡಿಟ್ ಆಗಿದ್ದು, ಈ ತಹಲ್‌ವರೆವಿಗೂ ಲೆಕ್ಕಪರಿಶೋಧನೆಯಾಗಿರುವುದಿಲ್ಲ
3. ಸಂಘವು ಕಾರ್ಯಕಾರಿ ಮಂಡಳಿ ಸಭೆಗಳನ್ನು ನಡೆಸದೇ ಬೈಲಾ ಉಲ್ಲಂಘನೆಯಾಗಿರುತ್ತದೆ.
4. ಸಂಘದ ಆಡಳಿತ ಮಂಡಳಿ ಅವಧಿಯು ದಿನಾಂಕ:31-3-2012ಕ್ಕೆ ಮುಕ್ತಾಯವಾಗಿದ್ದು ಈವರೆವಿಗೂ ಆಡಳಿತ ಮಂಡಳಿ ರಚನೆಗೆ ಯಾರು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ
5. ಸಂಘವು ಈ ಕಛೇರಿ ಸಮಾಪನಾ ಆದೇಶ ಸಂಖ್ಯೆ ಡಿಆರ್‌ಟಿ:ಎಲ್‌ಕ್ಯೂಡಿ:51;1998-99 ದಿನಾಂಕ:17-7-1998ರಲ್ಲಿ ಈಗಾಗಲೇ ಸಮಾಪನೆಗೊಂಡಿದ್ದು ಇದೇ ಆದೇಶದ ದಿನಾಂಕ:17-7-98ರಲ್ಲಿ ಪುನ:ಶ್ಚೇತನಗೊಂಡಿರುತ್ತಾರೆ. ಸಂಘದ ಆಡಳಿತ ಮಂಡಳಿಯು ದಿನಾಂಕ:31-3-2012ಕ್ಕೆ ಮುಕ್ತಾಯವಾಗಲಿದ್ದು ಈವರೆವಿಗೂ ಆಡಳಿತ ಮಂಡಳಿ ರಚನೆಗೆ ಕ್ರಮವಿಡದೆ ಹಾಗೂ ಸಂಘದ ಪುನ:ಶ್ಚೇತನಕ್ಕೆ ಯಾರು ಆಸಕ್ತಿ ತೋರದಿರುವುದರಿಂದ ಈ ಕೆಳಕಂಡ ಆದೇಶ ನೀಡಿದೆ.

## ಆದೇಶ

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್65/2012-13, ದಿನಾಂಕ:18-6-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ.ಹೆಚ್.ಬಾಲಶೇಖರ್ ಸಹಕಾರ ಸಂಘಗಳ ಉಪ ನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/139/ಸಿಎಲ್‌ಎಂ/2010 ದಿನಾಂಕ:17-2-2011ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ತಿಪಟೂರು ಟೌನ್ ಹರಿಜನ/ಗಿರಿಜನ ಮಹಿಳಾ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಗಾಂಧಿನಗರ ತಿಪಟೂರು ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು ತಿಪಟೂರು ತಾಲ್ಲೂಕು, ತಿಪಟೂರು ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ ಜವಾಬ್ದಾರಿ ತ:ಖ್ತೆ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾಪಟ್ಟಿಯ 3 ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಿ ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:18-6-2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ತುಮಕೂರು ಜಿಲ್ಲೆ, ತುಮಕೂರು.**

**ಪಿ.ಆರ್. 857**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE – CLARIFICATION UNDER SECTION 12 (7) OF THE KARNATAKA TAX ON ENTRY OF GOODS ACT, 1979

**Sub :** KTEG Act, 1979 – clarification of rate of entry tax on electrically operated Hand Tools – reg.

**Ref :** Application dated 27-02-2012 of M/s Ideal Power Tools Marketing Company, Bangalore - TIN 29820641507.

In the application cited above, M/s Ideal Power Tools Marketing Company, No.105, N.R.Road, Bangalore – 560 002 has sought clarification regarding the rate of entry tax on electrically operated hand tools.

2. Section 12(7) of the Karnataka Tax on Entry of Goods Act, 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.
3. Hence, the following clarification is issued.

### CLARIFICATION NO.KTEG/CLR/CR-31/2011-12, DATED 22-06-2012

It is clarified as under:

| Commodity | Rate of tax |
|---|---|
| Electrically operated hand tools | 2% as per Sl.No.7 of the table to the notification No. FD 11 CET 2002 dated 30-03-2002. |

**YOGENDRA TRIPATHI**,
Commissioner of Commercial Taxes,
(Karnataka), Bangalore.

**PR 871**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

~ ~ ~ ~ ~

**Sub :** KVAT Act, 2003 - Clarification under Section 59(4) on 'Charcoal powder' - reg.

**Ref :** Application dated 28-02-2012 of M/s. Sree Baktha Maruthi Enterprises, Bangalore. TIN:29270055978.

The registered dealer under the Act, of M/s. Sree Baktha Maruthi Enterprises, No.624, 7th Main Road, 5th Cross, Vijayanagar, Bangalore-560040 has sought clarification regarding the rate of tax applicable on 'Charcoal Powder'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.232/11-12, DATED 13-06-2012**

It is clarified that as per entry 15 of First Schedule 'Charcoal Powder ' is exempted from tax under Karnataka Value Added Tax Act,2003.

**YOGENDRA TRIPATHI**,
Commissioner of Commercial Taxes,
(Karnataka), Bangalore.

**PR 876**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ:ಬಿ3:ಅಮೊ:ವಾಹನ:ವಿವ:01/07-08, ದಿನಾಂಕ: 30-06-2012**

**ಉಪಸ್ಥಿತರು :** ಆರ್. ರವಿಶಂಕರ್, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಅಂಬ್ಲಿಗೋಳ ವಲಯ,
(ಸಹಾಯಕ ಸರ್ಕಾರಿ ಅಭಿಯೋಜಕರು ಸಾಗರ.)

**ಭಾದ್ಯತೆದಾರರು :** ಶ್ರೀ ಕೆರಿಯಪ್ಪ ಬಿನ್ ರಾಮಪ್ಪ, ಕುಗ್ವೆ ವಾಸಿ ಸಾಗರ ತಾಲ್ಲೂಕು.
(ಶ್ರೀ ಎಸ್.ರಾಮಚಂದ್ರ ಕೋಲ್ಸೆ ಬಿನ್ ಶಿವಪ್ಪ, ಯಲಕುಂದ್ಲಿ ವಾಸಿ, ಶುಂಠಿಕೊಪ್ಪ-ಅಂಚೆ. ಸಾಗರ ತಾಲ್ಲೂಕು. ಇವರ **G.P.A**)
(ಶ್ರೀ ಕೆ.ಹೆಚ್. ಕೃಷ್ಣಮೂರ್ತಿ, ವಕೀಲರು, ಸಾಗರ)

**ಪ್ರಸ್ತಾವನೆ:-**

ದಿ: 07-05-2007ರಂದು ಒಂದು ವಾಹನ ಮಹೇಂದ್ರ ಪಿಕ್ ಅಪ್ ನಂ:ಕೆ.ಎ.15-3212ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆ ಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:07-05-2007ರಂದು ವಲಯ ಅರಣ್ಯ ಅಧಿಕಾರಿ, ಅಂಬ್ಲಿಗೋಳ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿಯ ಅಂಬ್ಲಿಗೋಳ ವಲಯ ಅರಣ್ಯಾಧಿಕಾರಿಯ ಕಛೇರಿಯ ಮುಂಭಾಗದಲ್ಲಿ ಅಂಜನಾಪುರ-ಶಿಕಾರಿಪುರ ಪಿಡಬ್ಲ್ಯೂಡಿ ರಸ್ತೆಯಲ್ಲಿ ಬೆಳಿಗ್ಗಿನ ಜಾವ ಕಾಯುತ್ತ, ಹೋಗಿ-ಬರುವ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ, ಒಂದು ವಾಹನವನ್ನು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಹೋಗಿರುತ್ತದೆ. ಅದನ್ನು ಇಲಾಖಾ ವಾಹನ ಕೆಎ-15ಜಿ-250ರಿಂದ ಸುಮಾರು 2 ಕಿ.ಮೀ ದೂರದ ವರೆಗೆ ಹಿಂಬಾಲಿಸಿ ನಿಲ್ಲಿಸಿದರು.ನಂತರ ವಾಹನವನ್ನು ಪರಿಶೀಲಿಸಿದಾಗ ಮಹೇಂದ್ರ ಪಿಕ್‌ಅಪ್ ವಾಹನ ನಂ: ಕೆ.ಎ.15-3212, (ಛಾಸ್ಸಿಸ್ ನಂ: MA12A2A BA41H34981, ಇಂಜಿನ್ ನಂ: AB41H26776) ಆಗಿರುತ್ತದೆ. ವಾಹನದೊಳಗೆ ಆಗತಾನೆ ಗರಗಸದಿಂದ ಕೊಯ್ತು ಮಾಡಿದ ಹಸಿಯಾದ ಬೀಟೆ ನಾಟಾ 3=0.624ಎಂ3 ಇದ್ದು, ಈ ನಾಟಾದ ತುದಿಯಲ್ಲಿ, ಬುಡದಲ್ಲಿ ಯಾವುದೇ ಇಲಾಖಾ ಛಾಪಾವಿರುವುದಿಲ್ಲ ಮತ್ತು ಸಿಕ್ಕಿಬಿದ್ದ ಆರೋಪಿಗಳ ಹೆಸರು ಮತ್ತು ವಿಳಾಸ (1)ನೇ ರಾಜಶೇಖರ್ ಬಿನ್ ಕೆರಿಯಪ್ಪ ಕೆಳದಿ 22ವರ್ಷ, ಕುಗ್ವೆ ವಾಸಿ, ಸಾಗರ ತಾಲ್ಲೂಕು (2)ನೇ ಹರೀಶ್ ಬಿನ್ ಪರಮೇಶ್ವರಪ್ಪ, 23ವರ್ಷ, ಮನೆಘಟ್ಟ ಸಾಗರ ತಾಲ್ಲೂಕು (3)ನೇ ಪರಮೇಶ್ವರ ಬಿನ್ ನಾರಾಯಣಪ್ಪ, 24 ವರ್ಷ, ಹಲಸಿನಮನೆ, ಸಿರಿವಂತೆ, ಸಾಗರ ತಾಲ್ಲೂಕು ಇವರು ಹೇಳಿರುತ್ತಾರೆ. ಈ ಬೀಟೆ ನಾಟಾ ಸಾಗಿಸಲು ರಹದಾರಿ ಇಲ್ಲದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24 62, 71(ಎ), 104 ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ವಾಹನ, ಬೀಟೆ ನಾಟಾ ಮತ್ತು 3 ಜನ ಆರೋಪಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು, ಪ್ರಥಮ ವರ್ತಮಾನ ವರದಿ, ಮಹಜರ್‌ನಡಿ ಅಮೊ:ಸಂಖ್ಯೆ:16/07-08ನ್ನು ದಾಖಲಿಸಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನವನ್ನು ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ವಾಹನದ 'ಬಿ' ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ-01/07-08 ದಿ:22-05-2007ರಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಿದಂತೆ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರ ಪತ್ರ ಸಂಖ್ಯೆ:ಸಪ್ರಾಸಾಅ:ಸಾಗರ: ಆರ್‌ಬಿಎನ್/07-08 ದಿ: 26-05-2007 ರಲ್ಲಿ ಈ ವಾಹನದ 'ಬಿ' ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. 'ಬಿ' ಪ್ರತಿಯ ವಾಹನಕ್ಕೆ , ವಲಯ ಅರಣ್ಯಾದಿಕಾರಿ, ಅಂಬ್ಲಿಗೋಳ ಇವರು ಜಪ್ತು

ಮಾಡಿದ ವಾಹನಕ್ಕೆ ಮತ್ತು ಶ್ರೀ ಎಸ್ ರಾಮಚಂದ್ರ ಕೋಲ್ಸೆ ಬಿನ್ ಶಿವಪ್ಪ, ಯಲಕುಂದ್ಲಿ, ಶುಂಠಿಕೊಪ್ಪ ಅಂಚೆ, ಸಾಗರ ತಾಲ್ಲೂಕು ಇವರ ಜಿ.ಪಿ.ಎ ದಾರರಾದ ಶ್ರೀ ಕೆರಿಯಪ್ಪ ಬಿನ್ ರಾಮಪ್ಪ, 51 ವರ್ಷ, ಕುಗ್ವೆ, ಸಾಗರ ತಾಲ್ಲೂಕು ಇವರ ಅರ್ಜಿಯಲ್ಲಿನ ವಾಹನದ ಇಂಜಿನ್ ನಂಬರ್ ಮತ್ತು ಛಾಸ್ಸಿಸ್ ನಂಬರಿಗೆ ತಾಳೆಯಾಗಿರುತ್ತದೆ. ಆದ್ದರಿಂದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಈ ನ್ಯಾಯಲಯದಿಂದ ಕಾರಣ ಕೇಳಿ ಪತ್ರವನ್ನು ದಿ: 02–06–2007ರಂದು ವಲಯ ಅರಣ್ಯಾಧಿಕಾರಿ, ಸಾಗರ ಇವರ ಮುಖಾಂತರ ಜಾರಿ ಮಾಡಿದೆ.

ಆರ್.ಸಿ ಮಾಲೀಕರ ಜಿ.ಪಿ.ಎ.ದಾರರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ದಿ:22–05–2007ರಂದು ಸಲ್ಲಿಸಿ ಈ ವಾಹನ ಮಧ್ಯಂತರ ಅವಧಿಗೆ ಬಿಡಲು ಕೋರಿದ ಅರ್ಜಿಯನ್ನು ದಿ:04–08–2007ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ಆದೇಶದ ಮೇಲೆ ಆರ್.ಸಿ ಮಾಲೀಕರು ಮಾನ್ಯ ಶೀಘ್ರವಿಲೇವಾರಿ ನ್ಯಾಯಾಲಯ ಸಾಗರ ಇಲ್ಲಿ ಕ್ರಿ.ಮಿ ಅನಂ:16/2007ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಕ್ರಿಮಿನಲ್ ಮಿಸಲೇನಿಯಸ್ ನಂಬರ್‌ನ ದಿ:23–03–2010ರಲ್ಲಿ ಆರ್.ಸಿ ಮಾಲೀಕರ ಅರ್ಜಿಯನ್ನು ತಳ್ಳಿಹಾಕಿ ಆದೇಶವಾಗಿರುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀಜಿ.ಕೆ.ಸುದರ್ಶನ್ ಅಲಯ ಅರಣ್ಯ ಅಧಿಕಾರಿ ಬಾಳೆಹೊನ್ನೂರು ಇವರನ್ನು ದಿ:05–03–201 ರಂದು ನ್ಯಾಯಾಲಯಕ್ಕೆ ಕರೆಯಿಸಿ ಸತ್ಯಪ್ರತಿಜ್ಞೆ ಭೋದಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರವರಿಂದ "2006 ರಿಂದ 2009 ರ ವರೆಗೆ ವಲಯ ಅರಣ್ಯಾಧಿಕಾರಿಯಾಗಿ ಅಂಬ್ಲಿಗೊಳ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:07–0–2007 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಕಛೇರಿಯ ಮುಂದೆ ಕಾಯುತ್ತಿದ್ದಾಗ ಸುಮಾರು ಬೆಳಗಿನ ಜಾವ 5.45ರ ಸಮಯದಲ್ಲಿ ಒಂದು ವಾಹನ ಆನಂದಪುರಂ ಕಡೆಯಿಂದ ಶಿಕಾರಿಪುರ ಕಡೆಗೆ ಬರುತ್ತಿದ್ದು, ಟಾರ್ಚ್ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಹೋದಾಗ, ಇಲಾಖಾ ವಾಹನ ಕೆಎ–15 ಜಿ–250ರಿಂದ ಹಿಂಬಾಲಿಸಲಾಗಿ ಸುಮಾರು 2 ಕಿ.ಮೀ ದೂರದಲ್ಲಿ ನಿಲ್ಲಿಸಿದ ವಾಹನವನ್ನು ಪಂಚರ ಸಮಕ್ಷಮ ತಪಾಸಣೆ ಮಾಡಿದಾಗ ಮಹೇಂದ್ರ ಪಿಕ್‌ಅಪ್ ವಾಹನ ನಂ:ಕೆ.ಎ.15–3212, ಆಗಿದ್ದು, ವಾಹನದೊಳಗೆ ಆಗತಾನೆ ಗರಗಸದಿಂದ ಕೊಯ್ತು ಮಾಡಿದ ಹಸಿಯಾದ 3 ಬೀಟೆ ನಾಟಾ ಇದ್ದು, ಈ ನಾಟಾದ ತುದಿ, ಬುಡದಲ್ಲಿ ಯಾವುದೇ ಇಲಾಖಾ ಛಾಪಾವಿರುವುದಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಕ್ರಮಸಂಖ್ಯೆ ಕೊಟ್ಟು ಇಲಾಖಾ ಚಾಪಾ ಹೊಡೆದು, ನಾಟಾ ಮತ್ತು ವಾಹನವನ್ನು ಅಮಾನತು ಪಡಿಸಿಕೊಂಡು, ಮಹಜರ್‌ನ್ನು ಬರೆಯಲಾಯಿತು. ಅದನ್ನು ನಿಶಾನೆ ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು ಗುರುತಿಸಿದೆ. ಮುಂದಿನ ತನಿಖೆ ನಾನೇ ವಹಿಸಿಕೊಂಡು ವಿಚಾರಣಾ ವರದಿ ಬರೆದಿರುತ್ತೇನೆ. ವಿಚಾರಣಾ ವರದಿಯನ್ನು ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–2ಎ ಎಂದು ಗುರುತಿಸಿದೆ. ವಾಹನ ಮತ್ತು ಬೀಟೆ ತುಂಡುಗಳನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಿದೆವು. ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟಿ ಸವಾಲು ಕೆ.ಹೆಚ್.ಕೆ ವಕೀಲರಿಂದ ವರ್ತಮಾನದಂತೆ ಸುಮಾರು ಬೆಳಗಿನ ಜಾವ 5.30ರ ಸಮಯದಲ್ಲಿ ಬಂದಿತು. ರಾತ್ರಿ ಕಾವಲು ಮಾಡಲು ಬಂದ ಸಿಬ್ಬಂದಿಯವರೊಂದಿಗೆ 5.35ರಿಂದ ಕಾಯುತ್ತಿದ್ದೆವು. ಕಛೇರಿಯ ಮುಂದಿನ ರಸ್ತೆಯಲ್ಲಿ ತುಂಬಾ ವಾಹನಗಳು ಓಡಾಡುತ್ತಿರುತ್ತದೆ. ಆ ಸಂದರ್ಭದಲ್ಲಿ ಬೇರೆ ವಾಹನಗಳನ್ನು ತಪಾಸಣೆ ಮಾಡಿರುವುದಿಲ್ಲ. ಕಛೇರಿಯ ಎದುರಿನ ರಸ್ತೆ ಸುಮಾರು 1/2 ಕಿ.ಮೀನಷ್ಟು ನೇರವಾಗಿದೆ. ಯಂಕಾ ನಾಯ್ಕರವರು ವಾಹನ ನಿಲ್ಲಿಸಲು ಟಾರ್ಚ್ ಬೆಳಕಿನ ಮೂಲಕ ಸೂಚಿಸಿದಾಗ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಹೋದಾಗ, ಇಲಾಖಾ ವಾಹನ ಕೆಎ–15 ಜಿ–250ರಿಂದ ಹಿಂಬಾಲಿಸಲಾಗಿ ಸುಮಾರು 2 ಕಿ.ಮೀ ದೂರದಲ್ಲಿ ಅಡ್ಡಹಾಕಿ ನಿಲ್ಲಿಸಿದೆವು. ಘಟನಾ ದಿನದಂದು ಸದರಿ ವಾಹನವು ಚೆನ್ನಗಿರಿಗೆ ಎಳನೀರು ತರಲು ಹೋಗಿತ್ತು ಎಂದರೆ ಸರಿಯಲ್ಲ. ಮಹಜರನ್ನು ಕಛೇರಿಯ ಗೇಟಿನ ಮುಂದೆ ಸುಮಾರು 6ರಿಂದ 6.30ರವರೆಗೆ ಬರೆದೆವು. ಆ ಸಮಯದಲ್ಲಿ ಇಬ್ಬರು ಸ್ಥಳೀಯರನ್ನು ಪಂಚರನ್ನಾಗಿ ಬರಮಾಡಿಕೊಂಡಿದ್ದೆವು. ನನ್ನ ಸಮಕ್ಷಮ ಪಂಚಾಯ್ತುದಾರರು ಮಹಜರನ್ನು ಬರೆಸಿರುತ್ತಾರೆ. ಸದರಿ ದಿನದಂದು ವಾಹನದಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸಿರಲಿಲ್ಲವೆಂದರೆ ಸರಿಯಲ್ಲ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ವೆಂಕನಾಯ್ಕ ನಿವೃತ್ತ ವನಪಾಲಕ ಇವರನ್ನು ದಿ:02–07–2011 ರಂದು ಕರೆಯಿಸಿ ಸತ್ಯಪ್ರತಿಜ್ಞೆ ಭೋದಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರವರಿಂದ "ನಾನು ನಿವೃತ್ತಿ ಹೊಂದುವ ಪೂರ್ವದಲ್ಲಿ 3 ವರ್ಷಗಳ ಕಾಲ ಅಂಬ್ಲಿಗೋಳವಲಯದಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸಿರುತ್ತೇನೆ". ದಿನಾಂಕ 07–05–2007 ರಂದು ನಮ್ಮ ವಲಯ ಅರಣ್ಯಾಧಿಕಾರಿಯವರಿಗೆ ಬಂದ ಮಾಹಿತಿಯಂತೆ ನಾವು ಕಛೇರಿಯ ಮುಂದೆ ರಸ್ತೆಯಲ್ಲಿ ಕಾಯುತ್ತಿದ್ದಾಗ ಬೆಳಗಿನ ಜಾವ 5–30ರ ಸಮಯಕ್ಕೆ ಆನಂದಪುರಂ ಕಡೆಯಿಂದ ಒಂದು ವಾಹನ ಬರುತ್ತಿದ್ದು, ಬ್ಯಾಟರಿ ಸಹಾಯದಿಂದ ನಿಲ್ಲಿಸಲು ಸೂಚನೆ ಕೊಟ್ಟರೂ ವಾಹನ ನಿಲ್ಲಿಸದೇ ಮುಂದೆ ಹೋಗಿರುತ್ತದೆ. ನಂತರ ಇಲಾಖಾ ವಾಹನದಿಂದ ಬೆನ್ನಟ್ಟಿ 2 ಕಿ.ಮೀ ದೂರ ಅಂತರದಲ್ಲಿ ತಡೆದೆವು. ಅದರಲ್ಲಿ 3 ಜನರನ್ನು ಹಿಡಿದೆವು. ವಾಹನದಲ್ಲಿದ್ದ ತುಂಡುಗಳು ಹಸಿಯಾಗಿದ್ದವು. ಅವುಗಳ ಮೇಲೆ ಇಲಾಖಾ ಛಾಪಾವಿರಲಿಲ್ಲ. ಅಸಾಮಿಗಳ ಹೆಸರು ಮತ್ತು ವಿಳಾಸ ಪಡೆದು ತುಂಡುಗಳಿಗೆ ಕ್ರಮಸಂಖ್ಯೆ ಕೊಟ್ಟು, ಅಳತೆ ಮಾಡಿ ತುಂಡುಗಳನ್ನು, ವಾಹನವನ್ನು ಮಹಜರು ಮಾಡಿ ಅಮಾನತ್ತುಪಡಿಸಿಕೊಂಡೆವು. ಸದರಿ ಮಹಜರನ್ನು ನಿಪಿ–1, ಅದರಲ್ಲಿನ ನನ್ನ ಸಹಿಯನ್ನು ನಿಪಿ–1ಬಿ ಎಂದು ಗುರುತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ನಾನೇ ದಾಖಲಿಸಿದ್ದು, ಅದನ್ನು ನಿಶಾನೆ ಪಿ2 ಎಂದು, ನನ್ನ ಸಹಿಯನ್ನು 2ಎ ಎಂದು, ಜಪ್ತು ವರದಿಯನ್ನು ನಿಶಾನೆ ಪಿ3 ಎಂದು, ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ".

ಪಾಟಿ ಸವಾಲು ಕೆ.ಹೆಚ್.ಕೆ ವಕೀಲರಿಂದ ಆ ದಿನ ವರ್ತಮಾನ ವಲಯ ಅರಣ್ಯಾಧಿಕಾರಿಯವರಿಗೆ ಬಂದಿರುತ್ತದೆ. ನಾನು ವಾಹನ ನಿಲ್ಲಿಸಲು ಟಾರ್ಚ್ ಬೆಳಕಿನ ಮೂಲಕ ಸೂಚಿಸಿದೆ. ವಾಹನದಲ್ಲಿದ್ದ ಆಸಾಮಿಗಳು ಓಡಲು ಪ್ರಯತ್ನಿಸಿದರು. ನಾನು ರಾಜಶೇಖರನನ್ನು ಹಿಡಿದೆ. ಉಲ್ಲಾಸ್ ವನಪಾಲಕರು ಹರೀಶ್ ಎಂಬುವನನ್ನು ಹಿಡಿದರು. ವಾಹನ ಹಿಡಿದ ಸುತ್ತಾಮುತ್ತಾ ಮನೆಗಳು ಇವೆ ಎಂದರೆ ಸರಿಯಲ್ಲ. ಆ ಸಮಯದಲ್ಲಿ ಖಾಸಗೀ ವ್ಯಕ್ತಿಗಳು ಇರಲಿಲ್ಲ. ಮಹಜರನ್ನು ನಾನೇ ಬರೆದಿರುತ್ತೇನೆ. ಪಂಚನಾಮೆಯನ್ನು ಕಛೇರಿಯಲ್ಲಿ ಮಾಡಿದೆವೆಂದರೆ ಸರಿಯಲ್ಲ. ನಮ್ಮ ಕಛೇರಿಯಲ್ಲಿ ಅನಧಿಕೃತ ನಾಟಾಗಳಿದ್ದವೆಂದರೆ ಸರಿಯಲ್ಲ. ಅಂತಹ ನಾಟಾ ಹಾಕಿ ಕೇಸು ದಾಖಲಿಸಿದೆವೆಂದರೆ ಸರಿಯಲ್ಲ.ವಾಹನ ಮಾಲೀಕರಿಗೂ ಜಪ್ತಾದ ಅರಣ್ಯ ಉತ್ಪನ್ನಕ್ಕೂ ಸಂಬಂಧವಿಲ್ಲವೆಂದರೆ ಸರಿಯಲ್ಲ.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:23–07–2011, 30–07–2011, 20–08–2011, 17–09–2011,01–10–2011, 07–01–2012, 03–03–2012 ಮತ್ತು 24–03–2012 ರಂದು 8 ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ವಾದ ಮಂಡಿಸಲು 07–04–2012, 09–05–2012 ರಂದು ಮತ್ತು 16–06–2012 ರಂದು ವಾದ ಮಂಡಿಸಲು 3 ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:16–06–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೋಳ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಹೇಂದ್ರ ಪಿಕ್ ಅಪ್ ಕೆಎ–15–3212 ರಲ್ಲಿ ಬೀಟೆ ನಾಟಾ 3=0.624ಎಂ3 ನ್ನು ದಿ:07–05–2007ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಹೇಂದ್ರ ಪಿಕ್ ಅಪ್ ರಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:07–05–2007ರಂದು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಪತ್ತೆಹಚ್ಚಿರುವ ಮಹೇಂದ್ರ ಪಿಕ್ಅಪ್ ವಾಹನ ನಂ:ಕೆ.ಎ.15–3212ನಲ್ಲಿ ಬೀಟೆ ನಾಟಾ 3=0.624ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಬೀಟೆ ನಾಟಾವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೇಟೆ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ.ಮಾಲೀಕರಾದ ಶ್ರೀ ಎಸ್.ರಾಮಚಂದ್ರ ಕೋಲ್ಸೆ ಬಿನ್ ಶಿವಪ್ಪ ಯಲಕುಂದ್ಲಿ ವಾಸಿ, ಸಾಗರ ತಾಲ್ಲೂಕು ಇವರು ದಿ:22–05–2007 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:02–06–2007ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಎಂಟು ಬಾರಿ ದಿನಾಂಕಗಳನ್ನು ನೀಡಲಾಗಿದ್ದು. ಮತ್ತು ಡಿಫೆನ್ಸ್ ವಾದ ಮಂಡಿಸಲು ಮೂರು ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:07–05–2007 ರಂದು ಮಹೇಂದ್ರ ಪಿಕ್‌ಅಪ್ ವಾಹನ ನಂ:ಕೆ.ಎ.15–3212ನಲ್ಲಿ ಬೀಟೆ ನಾಟಾ 3=0.624ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಅಂಬ್ಲಿಗೋಳ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಅಂಬ್ಲಿಗೋಳ ವಲಯ ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್‌ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ.ಈ ಪ್ರಕರಣದ ಮೇಲಿನ ವಾಸ್ತುವಾಂಶ ಹಾಗೂ ಬಾಧ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ ,ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

> The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that "the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance anyone of them ………………………………………………………………………………………………… It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕನಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತು ಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್. ರವಿಶಂಕರ್,ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಮಹೇಂದ್ರ ಪಿಕ್‌ಅಪ್ ವಾಹನ ನಂ:ಕೆ.ಎ.15–3212ನ್ನು (ಛಾಸ್ಸೀಸ್ ನಂ: MAI2A2ABA41H34981,ಇಂಜಿನ್ ನಂ: AB41H26776)ಮತ್ತು ಬೀಟೆ ನಾಟಾ 3=0.624ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ

ದಿ: 30–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

**ಪಿ.ಆರ್. 920**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ, ಇವರ ನ್ಯಾಯಾಲಯದಲ್ಲಿ

**ಕ್ರ:ಬಿ3:ಅಮೊ:ವಾಹನ:ವಿವ:37/08–09, ದಿನಾಂಕ: 30–06–2012**

**ಉಪಸ್ಥಿತರು :** ಆರ್. ರವಿಶಂಕರ್, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಅಂಬ್ಲಿಗೋಳ ವಲಯ,
(ಸಹಾಯಕ ಸರ್ಕಾರಿ ಅಭಿಯೋಜಕರು ಸಾಗರ.)

**ಭಾಧ್ಯತೆದಾರರು :** ಶ್ರೀ ಮಹೀಬುಲ್ಲಾ ಬಿನ್ ಮೊಹ್ಮದ್ ಸಾಹೇಬ್, ಆಚಾಪುರ ಗ್ರಾಮ,
ಆನಂದಪುರಂ ಹೋಬಳಿ ಸಾಗರ ತಾಲ್ಲೂಕು.
(ಶ್ರೀ ಆರಿಫ್ ಆಲಿ ಖಾನ್, ವಕೀಲರು, ಸಾಗರ)

**ಪ್ರಸ್ತಾವನೆ:–**

ದಿ:25–12–2008ರಂದು ಒಂದು ವಾಹನ ಟಾಟಾ ಲಾರಿ ನಂ:ಕೆ.ಎ–20–3264ರಲ್ಲಿ 16 ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ವಲಯ ಅರಣ್ಯ ಅಧಿಕಾರಿ, ಅಂಬ್ಲಿಗೋಳ ವಲಯ ಇವರು ಪತ್ತೆ ಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:25–12–2008ರಂದು ವಲಯ ಅರಣ್ಯ ಅಧಿಕಾರಿ, ಅಂಬ್ಲಿಗೋಳ ವಲಯ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯಾಧಿಕಾರಿ ಅಂಬ್ಲಿಗೋಳ ವಲಯ ಮತ್ತು ಶಿಕಾರಿಪುರ ವಲಯದ ಸಿಬ್ಬಂದಿ ಮತ್ತು ಅರಣ್ಯ ಸಂಚಾರಿ ದಳ,ಶಿಕಾರಿಪುರ ಸಿಬ್ಬಂದಿ ಇಲಾಖಾ ವಾಹನದಲ್ಲಿ ಸಾಗರತಾಲ್ಲೂಕು ಆನಂದಪುರಂ ಹೋಬಳಿ ಬೈರಾಪುರ ಗ್ರಾಮದ ಬೋಳನಕಟ್ಟೆಯಿಂದ ಅಂಬ್ಲಿಗೋಳಕ್ಕೆ ಬರುವ ಪಿ.ಡಬ್ಲ್ಯೂ.ಡಿ ರಸ್ತೆಯ ಕರಡಿಬೆಟ್ಟ ಮನ್ನಾಜಂಗ್ಲಿಗೆ ಸೇರಿದ ಸಾಗುವಾನಿ ನಡುತೋಪಿನ ಪಕ್ಕದ ಎಸ್.ಎಫ್ 'ಡಿ' ಲೈನ್ ಕಲ್ಲು ಸಂಖ್ಯೆ: 132ರ ಬಳಿ ಕಾಯುತ್ತಿರುವಾಗ ಬೋಳನಕಟ್ಟೆ ಕಡೆಯಿಂದ ಬೆಳಿಗ್ಗೆ 7–30ರ ಸಮಯದಲ್ಲಿ ಒಂದು ಲಾರಿ ಬರುತ್ತಿದ್ದು, ಅದರ ನೊಂದಣಿ ಸಂಖ್ಯೆ: ಕೆ.ಎ–20–3264 ಆಗಿದ್ದು, ಅದನ್ನು ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರಿಂದ 50 ಮೀ ದೂರದಲ್ಲಿ ನಿಲ್ಲಿಸಿ ಚಾಲಕನೊಂದಿಗೆ 5–6 ಜನರು ಲಾರಿಯಿಂದ ಇಳಿದು ಓಡಲು ಪ್ರಾರಂಭಿಸಿದರು, ಅವರನ್ನು ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ಟಾಟಾ ಲಾರಿ ನಂ:ಕೆ.ಎ–20–3264, ಛಾಸ್ಸಿಸ್ ನಂ:360324JV0118343 ಮತ್ತು ಇಂಜಿನ್ ನಂ: JV 0124475 ಎಂದು ನಮೂದಿಸಲಾಗಿರುತ್ತದೆ. ನಂತರ ಲಾರಿಯನ್ನು ಪರಿಶೀಲಿಸಿದಾಗ ವಾಹನದ ಬಾಡಿಯೊಳಗೆ ಹಸಿಯಾದ, ಇಲಾಖಾ ಚಾಪಾ ಗುರುತಿಲ್ಲದ 16 ಬೀಟೆ ನಾಟಾವಿದ್ದು, ಈ ನಾಟಾಗಳನ್ನು ಅಳತೆ ಮಾಡಿದಾಗ 2.011 ಎಂ3 ಇದ್ದು, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24(ಸಿ),(2),(ಇ), 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೋಳ ವಲಯ ಅರಣ್ಯ ಮೊಕದ್ದಮೆ ಸಂ:87/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–37/08–09 ದಿ:29–12–2008ರಂದು ಪತ್ರ ಬರೆಯಲಾಗಿ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ದಿ:13–07–2009 ರಂದು ಪತ್ರ ಬರೆದು ಕೋರಿದಂತೆ ಸಾರಿಗೆ ಅಧಿಕಾರಿ ಮಂಗಳೂರು ರವರು ದಿ:30–07–2009ರಲ್ಲಿ ಈ ನ್ಯಾಯಾಲಯದಲ್ಲಿ ಬಿ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ವರದಿಯಲ್ಲಿ ನಮೂದಿಸಿದಂತೆ ಈ ವಾಹನದ ಆರ್.ಸಿ ಮಾಲೀಕರಾದ ಶ್ರೀ ಮಹೀಬುಲ್ಲಾ ಬಿನ್ ಮೊಹ್ಮದ್ ಸಾಹೇಬ್ ಆಚಾಪುರ ಗ್ರಾಮ, ಆನಂದಪುರಂ ಹೋಬಳಿ, ಸಾಗರ ತಾಲ್ಲೂಕುರವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಆರ್.ಸಿ ಮಾಲೀಕರಿಗೆ ಈ ನ್ಯಾಯಾಲಯದಿಂದ ಕಾರಣ ಕೇಳಿ ಪತ್ರವನ್ನು ದಿ: 19–09–2009ರಂದು ವಲಯ ಅರಣ್ಯಾಧಿಕಾರಿ, ಸಾಗರ ಇವರ ಮುಖಾಂತರ ಜಾರಿ ಮಾಡಿದೆ.

ಆರ್.ಸಿ ಮಾಲೀಕರು ವಕೀಲರ ಮುಖಾಂತರ ಮನವಿ ತಯಾರಿಸಿ ಈ ನ್ಯಾಯಾಲಯಕ್ಕೆ ದಿ:20–03–2009ರಂದು ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿ ಈ ವಾಹನ ಮಧ್ಯಂತರ ಅವಧಿಗೆ ಬಿಡಲು ಕೋರಿದ ಅರ್ಜಿಯನ್ನು ದಿ:20–03–2010ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಜಿ.ಕೆ.ಸುದರ್ಶನ್ ವಲಯ ಅರಣ್ಯ ಅಧಿಕಾರಿ ಬಾಳೆಹೊನ್ನೂರು ಇವರನ್ನು ದಿ: 05–03–2011 ರಂದು ಈ ನ್ಯಾಯಾಲಯಕ್ಕೆ ಕರೆಯಿಸಿ ಸತ್ಯಪ್ರತಿಜ್ಞೆ ಭೋದಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರವರಿಂದ "2006 ರಿಂ ದ 2009 ರ ವರೆಗೆ ವಲಯ ಅರಣ್ಯಾಧಿಕಾರಿಯಾಗಿ ಅಂಬ್ಲಿಗೊಳ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:25–12–2008 ರಂದು ಬಂದ ಖಚಿತ ವರ್ತಮಾನದ ಮೇರೆಗೆ ನಮ್ಮ ಸಿಬ್ಬಂದಿಯೊಂದಿಗೆ ಆನಂದಪುರಂ– ಶಿಕಾರಿಪುರ ರಸ್ತೆಯಲ್ಲಿರುವ ಬೋಳನಕಟ್ಟೆ ಅಡಿಕೆ ಫ್ಯಾಕ್ಟರಿ ಸಮೀಪ ಹೋಗಿ ಕಾಯುತ್ತಿದ್ದಾಗ ಬೆಳಗಿನಜಾವ ಸುಮಾರು 7–30ರ ಸಮಯದಲ್ಲಿ ಆನಂಧಪುರಂ ಕಡೆಯಿಂದ ಶಿಕಾರಿಪುರ ಕಡೆಗೆ ಒಂದು ಲಾರಿ ಬರುತ್ತಿದ್ದು, ಅದನ್ನು ನಿಲ್ಲಿಸಲು ಪ್ರಯತ್ನಿಸಿದರೂ ನಿಲ್ಲಿಸದೇ ಮುಂದೆ ಹೋಯಿತು. ಆ ವಾಹನದಲ್ಲಿ ಚಾಲಕ ಸೇರಿ 5–6 ಜನರಿದ್ದರು. ವಾಹನ ನಿಲ್ಲಿಸಿ ಓಡಿಹೋಗಲು ಪ್ರಯತ್ನಿಸಿದರು. ಅವರನ್ನು ಬೆನ್ನಟ್ಟಿಕೈಗೆ ಸಿಗದೇ ಪರಾರಿಯಾದರು. ಲಾರಿ ಕೆ.ಎ–20–3264 ಆಗಿದ್ದು ಅದರಲ್ಲಿ ಹಸಿಯಾದ 16 ಬೀಟೆ ತುಂಡುಗಳಿದ್ದವು.ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ನಂತರ ಅವುಗಳನ್ನು ಅಮಾನತ್ತು ಪಡಿಸಿ, ಅಳತೆ ಮಾಡಿ, ಇಲಾಖಾ ಚಾಪಾ ಹೊಡೆದು, ಅವುಗಳನ್ನು ಮತ್ತು ವಾಹನವನ್ನು ಅಮಾನತ್ತು ಪಡಿಸಿಕೊಂಡು ಮಹಜರ್ ಬರೆದೆವು. ಅದನ್ನು ಈಗ ನೋಡುತ್ತಿದ್ದು ನಿಪಿ–1ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–1ಎ ಎಂದು ಗುರುತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ನಿಪಿ–2 ಎಂದು ಅದರಲ್ಲಿನ ಸಹಿಯನ್ನು 2ಎ ಎಂದು ಜಪ್ತು ವರದಿಯನ್ನು ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–3ಎ ಎಂದು ವಿಚಾರಣಾ ವರದಿಯನ್ನು ನಿಪಿ–4 ಎಂದು ಅದರಲ್ಲಿನ ಸಹಿಯನ್ನು ನಿಪಿ–4ಎ ಎಂದು ಗುರುತಿಸಲಾಯಿತು. ಈ ವಾಹನವನ್ನು ಅಧೀಕೃತ ಅಧಿಕಾರಿಯವರ ಅನುಮತಿಯೊಂದಿಗೆ ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಹಾಗೂ ಬೀಟೆ ತುಂಡುಗಳನ್ನು ಶಿಕಾರಿಪುರ ನಾಟಾ ಸಂಗ್ರಹಾಲಯಕ್ಕೆ ಸಾಗಿಸಿದೆವು. ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟಿಸವಾಲು ಆರೀಫ್ ಆಲಿ ಖಾನ್ ವಕೀಲರಿಂದ "ಮಾಹಿತಿ ಬಂದ ಸಮಯದಲ್ಲಿ ನಾನು ಕಛೇರಿಯಲ್ಲಿದ್ದೆನು. ಬೆಳಗಿನ ಜಾವ 6–30ಕ್ಕೆ ಮಾಹಿತಿ ಬಂದಿತು, ಸೋಮರಾಜ್ ವನಪಾಲಕರ ಮೂಲಕ ಉಳಿದ ಸಿಬ್ಬಂದಿಯವರನ್ನು ಕರೆಸಿರುತ್ತೇನೆ. ಅಂಬ್ಲಿಗೋಳ ವಲಯ ಮತ್ತು ಶಿಕಾರಿಪುರ ವಲಯದ ಸಿಬ್ಬಂದಿಗಳೊಂದಿಗೆ ನಾನೂ ಹೋಗಿರುತ್ತೇನೆ. ಘಟನಾ ಸ್ಥಳವು 2–3ಕಿ.ಮೀ. ದೂರದಲ್ಲಿದೆ. ಮುಖ್ಯ ರಸ್ತೆಯಲ್ಲಿ ವಾಹನ ತಪಾಸಣೆ ಮಾಡಿರುತ್ತೇನೆ. ಒಂದು ವಾಹನ ಆನಂದಪುರಂ ಕಡೆಯಿಂದ ಅಂಬ್ಲಿಗೋಳ ಕಡೆ ಬರುತ್ತಿತ್ತು. ವಾಹನದಲ್ಲಿದ್ದ ಆಸಾಮಿಗಳು ಕಾಡಿನ ಕಡೆ ಓಡಿದರು. ಸದರಿ ತುಂಡುಗಳು ಗರಗಸದಿಂದ ಕೊಯ್ದ ಭಾಗವು ನೀರಿನಾಂಶ ಇತ್ತು. ಸೋಮರಾಜ್ ಸದರಿ ತುಂಡುಗಳಿಗೆ ಕ್ರಮಸಂಖ್ಯೆಯನ್ನು ನೀಡಿದರು. ಮಹಜರ್ ಸೋಮರಾಜ್ ಹಸ್ತಾಕ್ಷರದಲ್ಲಿದೆ. ಸ್ಥಳದಲ್ಲಿ ವಾಸದ ಮನೆ ಇರಲಿಲ್ಲ. ಸದರಿ ವಾಹನವನ್ನು ಶುಂಠಿ ಸಾಗಾಣಿಕೆಗೆ ಬಾಡಿಗೆಗೆ ಕಳುಹಿಸಿದ್ದುಬಗ್ಗೆ, ಅದು ತಲುಪಬೇಕಾದ ಜಾಗ ತಲುಪದೇ ಇರುವ ವಿಷಯ, ಈ ಬಗ್ಗೆ ಪೋಲೀಸರಿಂದ ಈ ವಿಷಯ ತಿಳಿಯಿತು ಎಂದರೆ ಗೊತ್ತಿಲ್ಲ. ಆ ದಿನ ಮಾಲೀಕರು ಟೆಂಪರರಿ ಚಾಲಕನನ್ನು ನೇಮಿಸಿಕೊಂಡಿದ್ದಾರೆಂದು ನನಗೆ ಗೊತ್ತಿಲ್ಲ. ಮಾಲೀಕರು ವಾಹನವನ್ನು ಯಾವುದೇ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿಲ್ಲ, ಸುಳ್ಳು ತನಿಖಾ ವರದಿ ತಯಾರಿಸಿದ್ದೇನೆಂದರೆ ಸರಿಯಲ್ಲ.

ಡಿಫೆನ್ಸ್ ಕಡೆ ಶ್ರೀ ಮುಹಿಬುಲ್ಲಾ ಇವರನ್ನು ದಿ:06–08–2011 ರಂದು ನ್ಯಾಯಾಲಯಕ್ಕೆ ಕರೆಸಿ ಸತ್ಯ ಪ್ರತಿಜ್ಞೆ ಬೋದಿಸಲಾಯಿತು .ಮುಖ್ಯ ವಿಚಾರಣೆ ಶ್ರೀ ಆರೀಫ್ ಆಲಿ ಖಾನ್ ರವರಿಂದ " ನಾನು ಈ ಕೇಸಿನಲ್ಲಿ ನಾನು ಈ ಕೆಸಿನಲ್ಲಿ ಅರ್ಜಿದಾರನಾಗಿರುತ್ತೇನೆ.ಲಾರಿ ಕೆಎ–20–3264ರ ಮಾಲೀಕ ನಾನು ಆಗಿರುತ್ತೇನೆ. ಸದರಿ ಲಾರಿಯನ್ನು ಬಾಡಿಗೆ ಹೊಡೆಯಲು ಇಟ್ಟುಕೊಂಡಿರುತ್ತೇನೆ. ಅದರಿಂದ ಬರುವ ಆಧಾಯದಿಂದ ಜೀವನ ಮಾಡುತ್ತಿದ್ದೇನೆ. ನನಗೆ 3 ಜನ ಮಕ್ಕಳಿದ್ದು, ಅ ಪೈಕಿ ಒಂದು ಗಂಡು 2 ಹೆಣ್ಣು ಮಕ್ಕಳು, ನನ್ನ ಮಗನ ಹೆಸರು ಶೇಕ್ ಮೊಹಾಸ್, ಅವನ ವಯಸ್ಸು 9 ವರ್ಷ. 2008 ನೆವೆಂಬರ್ ನಂದು ನನ್ನ ಮಗನಿಗೂ ಮತ್ತು ನನ್ನ ಅಣ್ಣನ ಮಗನಿಗೂ ಎತ್ತಿನಗಾಡಿಯಲ್ಲಿ ಬರುವಾಗ ಅಪಘಾತವಾಗಿದ್ದು ಚಿಕಿತ್ಸೆಗೆ ಮಣಿಪಾಲಿಗೆ ಸೇರಿಸಲಾಗಿತ್ತು. ನಂತರ ಹೊರರೋಗಿಯಾಗಿ ಚಿಕಿತ್ಸೆ ಪಡೆಯುತ್ತಿದ್ದು, 25–12–2008 ರಂದು ಆತನಿಗೆ ಚಿಕಿತ್ಸೆಗಾಗಿ ಮಣಿಪಾಲಕ್ಕೆ ಹೋಗಿದ್ದೆ, ನಾನಿಲ್ಲದ ಸಮಯದಲ್ಲಿ ಬೇರೆಯವರಿಂದ ಪರಿಚಿತನಾದ ಚಾಲಕನನ್ನು ನೇಮಿಸಿದ್ದೆ. ಶುಂಠಿ ಲೋಡ್ ಮಾಡಲು ಆ ದಿನ ಚಾಲಕನನ್ನು ಕಳುಹಿಸಿದ್ದೆ, ಶುಂಠಿಯನ್ನು ಆನಂದಪುರಂನಿಂದ ಹೊಸನಗರಕ್ಕೆ ಸಾಗಿಸಲು ಮಾತನಾಡಿದ್ದೆ, ವಾಹನ ತಲುಪಬೇಕದ ಜಾಗ ತಲುಪಿಲ್ಲವೆಂದು ಹೊಸನಗರ ಪಾರ್ಟಿ ತಿಳಿಸಿದರು. ಮಣಿಪಾಲದಿಂದ ಬಂದ ನಂತರ ವಿಷಯ ತಿಳಿದು ಹುಡುಕಾಡಿ ಪೋಲೀಸ್ ಠಾಣೇಗೆ ದೂರು ಕೊಡಲು ಹೋದಾಗ ಬೀಟೆ ಸಾಗಿಸುವ ಸಲುವಾಗಿ ವಾಹನ ಜಪ್ತಾಗಿರುವ ಕುರಿತು ತಿಳಿಸಿದರು. ನಾನು ನನ್ನ ವಾಹನ ಬೀಟೆ ಸಾಗಿಸಲು ಕಳಿಸಿಲ್ಲ. ವಾಹನವನ್ನು ಬಾಡಿಗೆ ತೆಗೆದುಕೊಂಡು ಹೋದವನು ಬೀಟೆ ನಾಟಾಸಾಗಿಸಲು ಒಯ್ದ ವಿಷಯ ನನಗೆ ಗೊತ್ತಿಲ್ಲ. ಈ ಲಾರಿ ಬಿಟ್ಟರೆ ಬೇರೆ ನಮಗೆ ಜೀವನಕ್ಕೆ ದಾರಿ ಇರುವುದಿಲ್ಲ. ಈ ಲಾರಿಯನ್ನು ಯಾವತ್ತೂ ನಾನು ಅಕ್ರಮ ಕೆಲಸಕ್ಕೆ ಉಪಯೋಗಿಸಿರಲಿಲ್ಲ. ಆದ್ದರಿಂದ ನನ್ನ ಲಾರಿಯನ್ನು ನನಗೆ ಬಿಟ್ಟುಕೊಡಬೇಕಾಗಿ ಪ್ರಾರ್ಥನೆ.

ಡಿಫೆನ್ಸ್ ಸಾಕ್ಷಿ ಪಾಟಿ ಸವಾಲಿಗೆ ದಿ:03-03-2012, 24-03-2012, ಮತ್ತು 07-04-2012 ರಂದ ು3 ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ವಾದ ಮಂಡಿಸಲು 19-05-2012, 16-06-2012 ರಂದು 2 ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:16-06-2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೋಳ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಟಾಟಾ ಲಾರಿ ನೊಂದಣಿ ಸಂಖ್ಯೆ:ಕೆ.ಎ-20-3264ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆನಾಟಾ 2.011 ಎಂ3ನ್ನುದಿ:25-12-2008ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಟಾಟಾಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ-1:**

ದಿ:25-12-2008ರಂದು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಪತ್ತೆಹಚ್ಚಿರುವ ಟಾಟಾಲಾರಿ ನೊಂದಣಿ ಸಂಖ್ಯೆ:ಕೆ.ಎ-20-3264 ಬೀಟೆನಾಟಾ 2.011ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಬೀಟೆ ನಾಟಾವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೇಟೆ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ-2:**

ಶ್ರೀ ಮಹೀಬುಲ್ಲಾ ಬಿನ್ ಮೊಹ್ಮದ್ ಸಾಹೇಬ್, ಆಚಾಪುರ ಗ್ರಾಮ, ಆನಂದಪುರಂ ಹೋಬಳಿ ಸಾಗರ ತಾಲ್ಲೂಕು.ಇವರು ದಿ:20-03-2009 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:19-09-2009ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು 3 ಬಾರಿ ದಿನಾಂಕಗಳನ್ನು ನೀಡಲಾಗಿದ್ದು, ಮತ್ತು ಡಿಫೆನ್ಸ್ ವಾದ ಮಂಡಿಸಲು 2 ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:25–12–2008 ರಂದು ಟಾಟಾ ಲಾರಿ ವಾಹನ ನೊಂದಣಿ ಸಂಖ್ಯೆ: ಕೆ.ಎ–20–3264 ಬೀಟೆ ನಾಟಾ 2.011ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಅಂಬ್ಲಿಗೋಳ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಮತ್ತು ವಲಯ ಅರಣ್ಯಾಧಿಕಾರಿ ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ.ಈ ಪ್ರಕರಣದ ಮೇಲಿನ ವಾಸ್ತುವಾಂಶ ಹಾಗೂ ಬಾಧ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ ,ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸ ಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

> The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that "the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance anyone of them ………………………………………………………………………………………………………… It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕನಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತು ಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್. ರವಿಶಂಕರ್,ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಟಾಟಾ ಲಾರಿ ವಾಹನ ನೊಂದಣಿ ಸಂಖ್ಯೆ:ಕೆ.ಎ–20–3264ನ್ನು(ಛಾಸ್ಸೀಸ್‌ನಂ: MAI2A2ABA41H34981,ಇಂಜಿನ್‌ನಂ:AB41H26776) ಮತ್ತು ಬೀಟೆ ನಾಟಾ 2.011ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 30–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

**ಪಿ.ಆರ್. 921**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂ: ಕಸಂವಾಪ್ರ/117/ಕಸನಿ/2011, ಬೆಂಗಳೂರು, ದಿನಾಂಕ: 30.06.2012**

**ವಿಷಯ :** ದಿನಾಂಕ 01.01.2003 ರಿಂದ 31.12.2011ರ ಅವಧಿಗೆ 01.01.2012ರಲ್ಲಿದ್ದಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಗ್ರೂಪ್–'ಎ' ದರ್ಜೆಯ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಣೆ.

**ಉಲ್ಲೇಖ :** 1) ಅಧಿಕೃತ ಜ್ಞಾಪನ ಸಂ: ಸಂಕಇ 68 ಕಸನಿ 2003, ದಿನಾಂಕ 25.11.2003

2) ಅಧಿಸೂಚನೆ ಸಂ: ಕಸಂವಾಪ್ರ 117 ಕಸನಿ 2011, ದಿನಾಂಕ 17.02.2012.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಗ್ರೂಪ್–'ಎ' ಹಿರಿಯ ಶ್ರೇಣಿ ಹಾಗೂ ಗ್ರೂಪ್–'ಎ' ಕಿರಿಯ ಶ್ರೇಣಿ ವೃಂದದ ದಿನಾಂಕ 01.01.2003ರಲ್ಲಿದ್ದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಉಲ್ಲೇಖ (1)ರ ದಿನಾಂಕ 25.11.2003ರ ಅಧಿಕೃತ ಜ್ಞಾಪನ ಸಂ: ಸಂಕಇ 68 ಕಸನಿ 2003ರಲ್ಲಿ ಪ್ರಕಟಿಸಲಾಗಿದೆ. ಗ್ರೂಪ್–'ಎ' ಹಿರಿಯ ಶ್ರೇಣಿ ಹಾಗೂ ಗ್ರೂಪ್–'ಎ' ಕಿರಿಯ ಶ್ರೇಣಿ ವೃಂದದ ಹುದ್ದೆಗಳಿಗೆ ಆಗಿರುವ ನೇಮಕಾತಿಯನ್ನು ಆಧರಿಸಿ ಹಾಗೂ ದಿನಾಂಕ 03.03.2006ರಂದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂ: 627/1998 ಹಾಗೂ 629/1998ರಲ್ಲಿ ನೀಡಿದ ಆದೇಶವನ್ನು ಅನುಷ್ಠಾನಗೊಳಿಸಲು ಪ್ರಸ್ತುತ ದಿನಾಂಕ 01.01.2003 ರಿಂದ 31.12.2011ರ ಅವಧಿಗೆ ದಿನಾಂಕ 01.01.2012ರಲ್ಲಿದ್ದಂತೆ ಗ್ರೂಪ್–'ಎ' ಹಿರಿಯ ಶ್ರೇಣಿ ಹಾಗೂ ಗ್ರೂಪ್–'ಎ' ಕಿರಿಯ ಶ್ರೇಣಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ, ಬಾಧಿತ ನೌಕರರುಗಳಿಂದ ಆಕ್ಷೇಪಣೆಗಳನ್ನು 30 ದಿನಗಳೊಳಗೆ ಸಲ್ಲಿಸುವಂತೆ ಉಲ್ಲೇಖ(2)ರ ಅಧಿಸೂಚನೆಯಲ್ಲಿ ಆಹ್ವಾನಿಸಲಾಗಿತ್ತು. ಕಾಲಮಿತಿ ಅವಧಿಯಲ್ಲಿ ಸ್ವೀಕೃತಿಸಲಾದ ಆಕ್ಷೇಪಣೆಗಳನ್ನು ಪರಿಗಣಿಸಲಾಗಿದೆ. ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಬಿಟ್ಟು ಹೋಗಿದ್ದ ಶ್ರೀ ಎಂ.ಎಸ್. ಸಿದ್ದೇಗೌಡ, ಉಪ ನಿರ್ದೇಶಕರು 2) ಶ್ರೀ ಟಿ.ಎನ್. ದಾಸೇಗೌಡ, ಉಪ ನಿರ್ದೇಶಕರು, 3) ಶ್ರೀ ಎ.ಎಸ್. ನಾಗರಾಜ, ಉಪ ನಿರ್ದೇಶಕರು 4) ಶ್ರೀ ಮೆಹಬೂಬ್, ಉಪ ನಿರ್ದೇಶಕರು ಹಾಗೂ 5) ಅಶೋಕ್ ಛಲವಾದಿ, ಆಡಳಿತಾಧಿಕಾರಿ, ಕನ್ನಡ ಪುಸ್ತಕ ಪ್ರಾಧಿಕಾರ ಈ ಅಧಿಕಾರಿಗಳ ಹೆಸರುಗಳನ್ನು ಅನುಬಂಧ–5ರಲ್ಲಿ ಸೇರಿಸಲಾಗಿದೆ ಹಾಗೂ ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಸಲ್ಲಿಸಿರುವ ಮನವಿ ಹಾಗೂ ದಾಖಲೆಗಳನ್ನು ಆಧರಿಸಿ ಅವರಿಗೆ ದಿನಾಂಕ 25.07.1990 ರಿಂದ ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕವೆಂದು ಪರಿಗಣಿಸಿದೆ.

ದಿನಾಂಕ 01.01.2012ರಲ್ಲಿದ್ದಂತೆ ಗ್ರೂಪ್–ಎ ಹಿರಿಯ ವೇತನ ಶ್ರೇಣಿ ಮತ್ತು ಕಿರಿಯ ವೇತನ ಶ್ರೇಣಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರಗಳನ್ನು ಅನುಬಂಧ–1 ಮತ್ತು 2ರಲ್ಲಿ ಪ್ರಕಟಿಸಲಾಗಿದೆ ಹಾಗೂ ಜೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿರುವ ವಿಧಾನದ ಬಗ್ಗೆ ವಿವರಣಾ ಪಟ್ಟಿಯನ್ನು ಅನುಬಂಧ–3ರಲ್ಲಿ ಲಗತ್ತಿಸಲಾಗಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ದಿನಾಂಕ 01.01.2012ರಲ್ಲಿದ್ದಂತೆ ಗ್ರೂಪ್–ಎ ಹಿರಿಯ ವೇತನ ಶ್ರೇಣಿ ಮತ್ತು ಕಿರಿಯ ವೇತನ ಶ್ರೇಣಿ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂ: 627/1998 ಹಾಗೂ 629/1998, ದಿನಾಂಕ 03.03.2006ರಲ್ಲಿ ಮತ್ತು ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ: 5643/2006 ಮತ್ತು 5641/2006, ದಿನಾಂಕ 11.08.2011ರಲ್ಲಿ ನೀಡಿರುವ ತೀರ್ಪಿನನ್ವಯ ಅನುಬಂಧ 4–5ರಲ್ಲಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ,
(ಆಡಳಿತ ಕನ್ನಡ)

## ಅನುಬಂಧ–1

### ದಿನಾಂಕ 01.01.2003 ರಿಂದ 01.01.2012ರಲ್ಲಿದ್ದಂತೆ ಗ್ರೂಪ್–'ಎ' ಹಿರಿಯ ವೇತನ ಶ್ರೇಣಿ ವೃಂದದ ಅಂತಿಮ ಜೇಷ್ಠತಾ ಪಟ್ಟಿ

### ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರ

| ಕ್ರ.ಸಂ. | ಬ್ಲಾಕ್ ಅವಧಿ | ಬ್ಲಾಕ್ ಅವಧಿಯಲ್ಲಿ ಉದ್ಭವವಾದ ರಿಕ್ತ ಸ್ಥಾನಗಳು | ವೃಂದ ಮತ್ತು ನೇಮಕಾತಿಗಳಿಗೆ ನಿಗಧಿಪಡಿಸಲಾದ ಕೋಟಾ | | ಕೋಟಾ ಪ್ರಕಾರ ಲಭ್ಯವಾಗುವ ರಿಕ್ತ ಸ್ಥಾನಗಳು | | ವಾಸ್ತವವಾಗಿ ಭರ್ತಿ ಮಾಡಲಾದ ರಿಕ್ತ ಸ್ಥಾನಗಳು | | ಕೋಟಾ ಮಿತಿಯಲ್ಲಿ ಮಾಡಲಾದ ನೇಮಕಾತಿ | | ಹೆಚ್ಚುವರಿ (+) ಕೊರತೆ (–) | | ನಂತರದ ಬ್ಲಾಕ್‌ನಲ್ಲಿ ಹೊಂದಿಸಬೇಕಾದ ಹೆಚ್ಚುವರಿ ನೇಮಕಾತಿ | | ನೇಮಕಾತಿಗಳ ಸಂಚಿತ ಹೆಚ್ಚುವರಿ (+) ಕೊರತೆ (–) | | ಜ್ಯೇಷ್ಠತೆಗಾಗಿ ಕ್ರಮ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|---|
| | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** | **15** | **16** | **17** | **18** |
| 1 | 27.09.1984 ರಿಂದ 08.10.1999 ರವರೆಗೆ | 3 | ಇಲ್ಲ | ಶೇ.100 | ಇಲ್ಲ | 3 | ಇಲ್ಲ | 3 | ಇಲ್ಲ | 3 | ಇಲ್ಲ | – | ಇಲ್ಲ | – | ಇಲ್ಲ | – | – |
| 2 | 09.10.1999 ರಿಂದ 31.12.2011 ರವರೆಗೆ | 1 | ಇಲ್ಲ | ಶೇ.100 | ಇಲ್ಲ | 1 | ಇಲ್ಲ | 1 | ಇಲ್ಲ | 1 | ಇಲ್ಲ | – | ಇಲ್ಲ | – | ಇಲ್ಲ | – | – |

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ)

**ಅನುಬಂಧ–2**

**ದಿನಾಂಕ 01.01.2003 ರಿಂದ 01.01.2012ರಲ್ಲಿದ್ದಂತೆ ಗ್ರೂಪ್–'ಎ' ಕಿರಿಯ ವೇತನ ಶ್ರೇಣಿ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

**ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರ**

| ಕ್ರ ಸಂ | ಬ್ಲಾಕ್ ಅವಧಿ | ಬ್ಲಾಕ್ ಅವಧಿಯಲ್ಲಿ ಉದ್ಭವವಾದ ರಿಕ್ತ ಸ್ಥಾನಗಳು | ವೃಂದ ಮತ್ತು ನೇಮಕಾತಿಗಳಿಗೆ ನಿಗಧಿಪಡಿಸಲಾದ ಕೋಟಾ | | | ಕೋಟಾ ಪ್ರಕಾರ ಲಭ್ಯವಾಗುವ ರಿಕ್ತ ಸ್ಥಾನಗಳು | | | ವಾಸ್ತವವಾಗಿ ಭರ್ತಿ ಮಾಡಲಾದ ರಿಕ್ತ ಸ್ಥಾನಗಳು | | | ಕೋಟಾ ಮಿತಿಯಲ್ಲಿ ಮಾಡಲಾದ ನೇಮಕಾತಿ | | | ಹೆಚ್ಚುವರಿ (+) ಕೊರತೆ (–) | | | ನಂತರದ ಬ್ಲಾಕ್‌ನಲ್ಲಿ ಹೊಂದಿಸಬೇಕಾದ ಹೆಚ್ಚುವರಿ ನೇಮಕಾತಿ | | | ನೇಮಕಾತಿಗಳ ಸಂಚಿತ ಹೆಚ್ಚುವರಿ (+) ಕೊರತೆ (–) | | | ಜ್ಯೇಷ್ಠತೆಗಾಗಿ ಕ್ರಮ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** | **15** | **16** | **17** | **18** | **19** | **20** | **21** | **22** | **23** | **24** | **25** |
| 1 | 27.09.1984 ರಿಂದ 28.07.1997 ರವರೆಗೆ | 4 | ಶೇ.50 | ಶೇ.50 | – | 2 | 2 | – | – | 5 | – | – | 5 | – | –2 | (+)3 | – | (+)2 | –3 | – | –2 | (+)2 | – | |
| 2 | 29.07.1997 ರಿಂದ 07.10.1999 ರವರೆಗೆ | 5 +1 | ಶೇ50 | ಶೇ.50 | – | – | 5 | 1 | 2 | 1 | – | 2 | 1 | – | – | – | – | – | – | – | – | – | – | |
| 3 | 08.10.1999 ರಿಂದ 31.12.2011 ರವರೆಗೆ | 6 +4 | ಶೇ.25 | ಶೇ.75 | – | 1 | 4 | 5 | – | 4 | 4 | – | 4 | 4 | –1 | – | –1 | (+)1 | – | (+)1 | – | – | – | |

- ದಿನಾಂಕ 10.02.2011ರ ಸರ್ಕಾರಿ ಆದೇಶ ಸಂ: ಕಸಂವಾಪ್ರ 119 ಕರಅ 2010ರಲ್ಲಿ ಕರ್ನಾಟಕ ಉರ್ದು ಅಕಾಡೆಮಿಯನ್ನು ಅಲ್ಪ ಸಂಖ್ಯಾತರ ಇಲಾಖೆಗೆ ವರ್ಗಾಯಿಸಲಾಗಿದೆ.
- ದಿನಾಂಕ 30.12.2011ರ ಸರ್ಕಾರಿ ಆದೇಶ ಸಂ:ಕಸಂವಾಪ್ರ 522 ಕಸಧ 2011ರಲ್ಲಿ ಶಿವಮೊಗ್ಗ ರಂಗಾಯಣ ಹಾಗೂ ಧಾರವಾಡ ರಂಗಾಯಣ ಘಟಕಗಳನ್ನು ಸ್ಥಾಪಿಸಲಾಗಿದೆ.
  ಈ ಹುದ್ದೆಗಳನ್ನು ರಿಕ್ತ ಸ್ಥಾನಗಳ ಹಂಚಿಕೆಯಲ್ಲಿ ಸರಿದೂಗಿಸಲಾಗಿದೆ.

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ)

